ಓಂ ; ಶಂ.

# ಬೇವು-ಬೆಲ್ಲ

ಸೃಷ್ಟಿಯಲ್ಲಿ ಹಗಲಿರುಳು, ಅರಿವು ಮರೆವು, ನೋವು ನಲವು, ಹುಟ್ಟು ಸಾವು, ತಗ್ಗು ದಿನ್ನೆ, ಮಣ್ಣು ಕಲ್ಲು, ಬೇವು ಬೆಲ್ಲ, ಕಾಯಜೀವ ಇವು, ಕೂಡಿ ಹುಟ್ಟಿವೆ. ಒಂದು ಮರದ ಎರಡು ರೆಂಬೆಗಳಂತೆ, ಎಲೆ ಹೂವುಗಳಂತೆ, ಕಾಯಿ ಹಣ್ಣು ಗಳಂತೆ. ಕೂಡಿಬಾಳಿವೆ. ಗುಣಧರ್ಮಗಳಲ್ಲಿ ಅವೆಷ್ಟೋ ಅವಾಂತರಗಳಿದ್ದರೂ ಪ್ರಕೃತಿ, ಅವನ್ನು ಜತೆಗೂಡಿಸಿದೆ; ಜತನ ಮಾಡಿದೆ. ಇದರಲ್ಲಿದೆ ಒಂದು ಅಪಾರವಾದ ರಹಸ್ಯ; ಅಪ್ರಮೇಯವಾದ ಸ್ವಾರಸ್ಯ

ವ್ಯಕ್ತವಾಗಿಯೊ ಅವ್ಯಕ್ತವಾಗಿಯೊ ದ್ವಂದ್ವಮಯ ವಾದುದು ಈ ಧಾತ್ರಿ! ಇದುವೇ ಒಂದು ದೊಡ್ಡ ದರ್ಶನ; ದಿವ್ಯದರ್ಪಣ. ದ್ವೈತದಲ್ಲಿಯೆ ಅದ್ವೈತವನ್ನು ಕಾಣುವ ತತ್ತ್ವ ಇದರಲ್ಲಿ ಅಡಕವಾಗಿದೆ. ಎರಡೊಂದಾಗಿ ಇರುವುದೇ ಸೃಷ್ಟಿ. ಒಂದು ಒಂದಾಗಿರುವುದೇ ಪರಮೇಷ್ಠಿ.

ದ್ವಂದ್ವವು ಸೃಷ್ಟಿಯನ್ನು ಸಾರವತ್ತಾಗಿ ಮಾಡಿದೆ. ಸಂವತ್ ಶಾಲಿಯನ್ನಾಗಿ ರಚಿಸಿದೆ. ಹಲವೆಡೆಯಲ್ಲಿ ಬೆರೆತೂ ಬೆರೆಯದಂತಿದ್ದು ಬೆಳಗಿದೆ.

ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ.
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ.
ಶರೀರದೊಳಗಾತ್ಮನು ಆರೂ ಕಾಣದಂತಿರಿಸಿದೆ.
ನೀನು ಬೆರಸಿದ-ಭೇದಕ್ಕೆ ಬೆರಗಾದೆನಯ್ಯ ರಾಮನಾಥ!

ದಿಟಕ್ಕೂ ಬೆರಗಾಗತಕ್ಕ ಮಾತಿದು; ಮಹತ್ತಿದು. ಉರಿಯಿಲ್ಲದ ಮರ, ತುಪ್ಪಿಲ್ಲದ ಹಾಲು ಏತಕ್ಕೆ ಬರುವವೆಂಬುದನ್ನು ಬಗೆಯಬೇಕು. ಇದರಂತೆ. ಇರುಳಿಲ್ಲದ ಹಗಲು ಹೊರಲಾರದ ಹೊರೆಯಾಗುತ್ತಿರಲಿಲ್ಲವೆ? ದುಃಖವಿಲ್ಲದ ಸುಖ, ಸಾಧನೆಯಿಲ್ಲದ ಸಿದ್ಧಿ, ಬೇವಿಲ್ಲದ ಬೆಲ್ಲ ಇವೆಲ್ಲ ಅನುಭವಕ್ಕೆ ಬಾರದ-ಆನಂದವನ್ನು ತಾರದ ವಸ್ತುಗಳಾಗಿ ಇರುತ್ತಿರಲಿಲ್ಲವೆ? ಇವೆಲ್ಲವನ್ನು ನೆನೆದರೆ ದ್ವಂದ್ವದಲ್ಲಿ ಸಾರವತ್ತತೆಯಿದೆಯೆಂಬುದು ಸ್ಫುಟವಾಗುವುದಿಲ್ಲವೆ?

ದ್ವಂದ್ವವೇ ಧರ್ಮಕ್ಕೆ ದಾರಿ. ದ್ವಂದ್ವವಿಲ್ಲದಿದ್ದರೆ ಧರ್ಮದ

ಮಾತಿರಲಿಲ್ಲ. ದ್ವಂದ್ವದಲ್ಲಿ ಮೇಲುಕೀಳು ಭಾವ ಬಲಿತು ಬಂದಿದೆ ಇದು ವಿಹಿತವಲ್ಲ, ವಿವೇಕವಲ್ಲ. ಮಾನ–ಅಪಮಾನ, ಜಯ ಅಪಜಯ, ಪಾಪ–ಪುಣ್ಯ, ಸುಖ–ದುಃಖ, ಶೀತ–ಉಷ್ಣ ಇವೆಲ್ಲವೂ ದ್ವಂದ್ವಗಳೆ ! ಇವುಗಳಲ್ಲಿ ಒಂದು ಕೀಳು, ಇನ್ನೊಂದು ಮೇಲು. ಒಂದು ಬೇಕು, ಇನ್ನೊಂದು ಬೇಡ; ಎಂದು ಲೋಕ ಎಣಿಸಬಯಸುತ್ತದೆ. ಇದು ಪರಮಾರ್ಥವಲ್ಲ; ಪರಾಮರ್ಶೆ ಯಲ್ಲ. ಈ ದ್ವಂದ್ವಗಳನ್ನೆಲ್ಲ ಸಮವಾಗಿ ಕಾಣುವುದೇ 'ಯೋಗ' ವೆಂದು ಗೀತೆ ಸಾರಿದೆ. ಸಾಧುವೆಂದು ಸಾಧಿತವಾಗಿದೆ.

ಬೇವಿಲ್ಲದ ಬೆಲ್ಲ ಅದು ಬೆಲ್ಲವೆಂದು ನಾವು ಭಾವಿಸುತ್ತಿದ್ದೇವೆ ? ಬೆಲ್ಲ ಬೇಕೆಂದು ಬಯಸುತ್ತಿದ್ದೇವೆ ? ಬೆಲ್ಲಕ್ಕೆ ಬೇವು ಪೋಷಕ ವಸ್ತುವಲ್ಲವೆ ? ಬೇವಿದ್ದರೆ ಬೆಲ್ಲಕ್ಕೆ ಬೆಲೆಯಲ್ಲವೆ ? ಇರುಳಿದ್ದರೆ ಬೆಳಕಿಗೆ ಬೆಲೆಯಲ್ಲವೆ ?

ದ್ವಂದ್ವವು ವಿಷಯ, ಗುಣ, ಜೀವ–ಎಂದು ಅನಂತ ಬಗೆಯಾಗಿದೆ. ಕಲ್ಲು ಮಣ್ಣು, ಬೇವು ಬೆಲ್ಲ ಮುಂತಾದವು ಗಳು ವಿಷಯ ದ್ವಂದ್ವಗಳು. ಸುಖ ದುಃಖ, ಶೀತೋಷ್ಣ, ಅರಿವು ಮರೆವು ಮುಂತಾದವುಗಳು ಗುಣದ್ವಂದ್ವಗಳು; ಸತಿ–ಪತಿ, ಗುರು–ಶಿಷ್ಯ, ತಂದೆ–ತಾಯಿ, ತಾಯಿ–ಮಗು ಮುಂತಾದ

ವುಗಳು ಜೀವದ್ವಂದ್ವಗಳು. ಕಾಲ ಮತ್ತು ಕರ್ಮದ್ವಂದ್ವಗಳೂ ಇರುತ್ತವೆ. ಹಗಲಿರುಳು ಕಾಲದ್ವಂದ್ವ ; ಪಾಪ-ಪುಣ್ಯ ಕರ್ಮದ್ವಂದ್ವ.

ಬೇವು ಬೆಲ್ಲಗಳಲ್ಲಿನ ಭೇದ ಘಟ-ಪಟಗಳಲ್ಲಿ ಇರುವಂತಹದಲ್ಲ. ಹಾಲು-ಜೇನುಗಳಲ್ಲಿ ಇರುವಂತಹದು. ಬೆರೆಯಿಸಬಹುದು. ಬೇವು ಒಮ್ಮೆ ಕಹಿಯಾದರೂ ಮತ್ತೊಮ್ಮೆ ಸಿಹಿಯಾಗುತ್ತದೆ. ಅಧರಕ್ಕೆ ಕಹಿ ; ಉದರಕ್ಕೆ ಸಿಹಿ.

ಮಾನವನಿಗೆ ಸಿಹಿ ಎಷ್ಟು ಅಗತ್ಯವೊ ಕಹಿಯೂ ಅಷ್ಟೇ ಅಗತ್ಯ. 'ಬೇವು-ಬೆಲ್ಲ' ಈ ಸಂದೇಶವನ್ನು ಎತ್ತಿ ಸಾರುತ್ತಿದೆ; ಈ ಸದುಪದೇಶವನ್ನು ಎತ್ತಿ ಹೇಳುತ್ತಿದೆ.

ಕಹಿ-ಸಿಹಿಗಳ ಸಮ್ಮಿಲನ ಇಂದಿನದಲ್ಲ, ಅಂದಿಲ್ಲನದಲ್ಲ ; ಯುಗಾದಿಯಂದಿನದು ಕಹಿ ತಂಪು ; ಸಿಹಿ ಉಷ್ಣ. ಇವೆರಡರ ಒಕ್ಕೂಟವೆ ಸಮಶೀತೋಷ್ಣ ! ಸಮಶೀತೋಷ್ಣವೇ ಆರೋಗ್ಯ ಸಾಧನ ; ಸೌಭಾಗ್ಯ ಜೀವನ.

ಒಂದು ವರುಷ ಮುಗಿದು ಇನ್ನೊಂದು ವರುಷ ಮೊದಲಾಗುವ ದಿನ ಯುಗಾದಿ. ಇಲ್ಲಿ ಯುಗವೆಂದರೆ ವರುಷ. ಹಳೆ ವರುಷದ ಮೇಲೆ ಹೊಸವರುಷದ ದಿನ ಕೂಡಿ ಬರುವದರಿಂದ

ಯುಗಾದಿ ಎಂದು ಕರೆದರು. ಹಣ್ಣೆಲೆಯ ಮೇಲೆ ಹಸುರೆಲೆಯು ಮೂಡಿ ಬರುವಂತೆ 'ಯುಗಾದಿ'ಯು ಹೊಸತಾಗಿ ಮೂಡಿ ಬರುತ್ತದೆ. ಹೊರಗಿನ ಪ್ರಕೃತಿಯಲ್ಲಿ ಹಳತುದನ್ನು ದೂಡಿ ಬರುತ್ತದೆ. ಮಾನವನ ಪ್ರಕೃತಿಯಲ್ಲಿ ಹೊಸತನವನ್ನು ಹರುಷವನ್ನು ಹುರುಪನ್ನು ತೀಡಿ ಬರುತ್ತದೆ. ಬಹಿರಂಗವನ್ನು ಅಂತರಂಗಕ್ಕೆ, ಅಂತರಂಗವನ್ನು ಬಹಿರಂಗಕ್ಕೆ ಕಲಸಿ ಮೆಲಸಿ ಬರುತ್ತದೆ.

ಯುಗಾದಿಯು ಭಾರತೀಯರ ಜೀವನದಲ್ಲಿ ಬೆರೆತು ಬಂದ ಹಬ್ಬ. ಭಾರತೀಯರನ್ನೆಲ್ಲ ಉಬ್ಬಿಸುವ ಹಬ್ಬ. ಈ ಹಬ್ಬದಲ್ಲಿ ಭಾರತೀಯರ ಸಂಸ್ಕೃತಿಯಿದೆ. ಅದರಲ್ಲಿಯೂ ಶೈವ ಸಂಸ್ಕೃತಿಯು ಸಾರ ಸಂದೇಶವಾಗಿ ನಿಂತಿದೆ. ಜೀವನದ ಅನುಪವು ಆದರ್ಶವಾಗಿ ಕಾಂತಿವೆತ್ತಿದೆ.

ಯುಗಾದಿಯ ದಿನ ಬೇವು ಬೆಲ್ಲಗಳನ್ನು ಕೂಡಿಸಿ ಮೆಲ್ಲುವುದು ಸಾಮ್ಯಯೋಗದ ಹೆಗ್ಗುರುಹು. ಇವೆರಡರಲ್ಲಿ ಕೇಡೊಳಿತುಗಳ ಸಾಮ್ಯವಿದೆ; ಸುಖ ದುಃಖಗಳ ಸಾಮ್ಯವಿದೆ; ಶೀತೋಷ್ಣಗಳ ಸಾಮ್ಯವಿದೆ; ಸಿಹಿ ಕಹಿಗಳ ಸಾಮ್ಯವಿದೆ.

ಬೇವು ಬೆಲ್ಲಕ್ಕೂ ಯುಗಾದಿಗೂ ನಿಕಟ ಸಂಬಂಧ ಬೆಳೆದು ಬಂದಿದೆ. ನಿಚ್ಚಟಾನುಬಂಧ ನೆರೆದು ನಿಂತಿದೆ. ಇದಕ್ಕೆ ಕಾರಣ

ವನ್ನು ಕೇಳಬೇಕಾಗಿಲ್ಲವಾದರೂ ಹೇಳಬೇಕಾಗಿದೆ.

ಹಿಂದೊಮ್ಮೆ ದೇವದಾನವರ ಯುದ್ಧವಾಯಿತು. ಅದರಲ್ಲಿ ದೇವತೆಗಳಿಗೆ ಸೋಲೊದಗಿತು. ದಾನವರು ದೇವಸಂಪತ್ತನ್ನೆಲ್ಲ ದೋಚುವರು. ಕಡಲಲ್ಲಿ ಮಡಗುವರು. ನಂತರ ದೇವದಾನವರಲ್ಲಿ ರಾಜಿಯಾಗುವುದು. ಕಡಲ ಮಡಲಲ್ಲಿರುವ ಸೊತ್ತನ್ನು ಹೊರತೆಗೆವ ಸಾಹಸ ನಡೆವುದು. ಮೇರುವನ್ನು ಮಂಥನ ದಂಡವನ್ನಾಗಿ ಆದಿಶೇಷವನ್ನು ಹಗ್ಗವನ್ನಾಗಿ ಮಾಡಿ ಸಮುದ್ರವನ್ನು ಸುರಾಸುರರು ಕಡೆಯುವರು. ಅದರ ಫಲವಾಗಿ ಧನ್ವಂತರಿ, ಲಕ್ಷ್ಮೀ, ಚಂದ್ರ, ಅಮೃತಗಳು ಹೊರಬೀಳುವವು. ಆಶೆಯಿಂದ ಮತ್ತಿಷ್ಟು ಜೋರಾಗಿ ಮಂಥನ ಮಾಡುವರು. ಆ ಬಾಧೆಗೆ ಆದಿಶೇಷನ ಬಾಯಿಂದ ಅಸಹ್ಯವಾದ ಅಸಾಧಾರಣವಾದ ವಿಷ ಹೊರ ಹೊಮ್ಮುವುದು. ಭುಗಿಭುಗಿಲೆಂದು ಉರಿಯಹತ್ತುವುದು. ಧರೆಯನ್ನೆಲ್ಲ ಧಗಧಗಿಸಿ ಕಬಳಿಸಲು ಮೊದಲಾಗುವುದು. ಅದನ್ನು ನಿವಾರಿಸಲು ಯಾವ ದೇವದಾನವರಿಂದ ಸಾಧ್ಯವಿಲ್ಲದೆ ಹೋಗುವುದು. ದುರ್ಬಲರಾದ ದೇವದಾನವರೆಲ್ಲ ದೇವದೇವನಾದ ಮಹಾದೇವನನ್ನು ಮೊರೆಯಿಡುವರು. ಅವರ ಪ್ರಾರ್ಥನೆಗೆ ಮೆಚ್ಚಿ ಪರಶಿವನು

ಆ ಹಾಲಾಹಲ ವಿಷವನ್ನು ಪಾನಮಾಡುವನು. ವಿಷವನ್ನು ಕಂಠದಲ್ಲಿಯೇ ಧರಿಸುವನು. ಸುಟ್ಟು ಬೂದಿಯಾಗಿ ಹಾಳಾಗುವ ಪ್ರಪಂಚವನ್ನು ಉಳಿಸಿ ಅನುಗ್ರಹಿಸುವನು. ಅನುಗ್ರಹಿಸಿ ಬದುಕಿಸಿದ ಆ ದಿನವೇ ಯುಗಾದಿ. ಅಂದು ಜೀವಕೋಟಿಗೆಲ್ಲ ಜೀವದಾನಮಾಡಿದ ಜಗದೀಶನು ವಿಷಪಾನ ಮಾಡಿದ ಸ್ಮಾರಕಕ್ಕಾಗಿ ಕೃತಜ್ಞತೆಗಾಗಿ ಮಾನವರು ಕಹಿಯಾದ ಬೇವನ್ನು ಬೆಲ್ಲದೊಡನೆ ಸೇರಿಸಿ ಸೇವಿಸತೊಡಗಿದರು. ಇದರಿಂದಾಗಿ ಬೇವು ಬೆಲ್ಲಕ್ಕೂ ಯುಗಾದಿಗೂ ಹತ್ತಿರದ ಸಂಬಂಧವುಂಟಾಗಿದೆ.

ಈ ಕಥೆ ಕೇವಲ ಪೌರಾಣಿಕ ಮಾತ್ರವಲ್ಲ. ಪ್ರತಿ ಪುರುಷನಿಗೂ ಸಂಬಂಧಪಟ್ಟುದು.

ಪ್ರತಿಯೊಬ್ಬರಲ್ಲಿಯೂ ಸುಗುಣ–ದುರ್ಗುಣ ರೂಪ ದೇವ ದಾನವರಿರುವರು. ಇವರಲ್ಲಿ ಕಾಳೆಗ ನಿತ್ಯ ನಡದೇ ಇರುತ್ತದೆ. ದುರ್ಗುಣಗಳಿಗೆ ಹೆಚ್ಚಾಗಿ ಜಯವೊದಗಿ ಸುಗುಣ ಸಂಪತ್ತು ಭೌತಿಕ ಸಂಪತ್ತೂ ಸಹ ನೀರ ಪಾಲಾಗುತ್ತದೆ.

ಸಂಸಾರವೇ ಮಹಾಸಾಗರ. ಅದರಲ್ಲಿ ಎಲ್ಲ ಸಂಪತ್ತೂ ಮುಳುಗಿದೆ. ಸುಗುಣ ದುರ್ಗುಣಗಳು ಅಜ್ಞಾನ ದಂಡಕ್ಕೆ ಮನೋ ಕುಂಡಲಿನಿಯನ್ನು ಕಟ್ಟಿ ಹೊಸೆಯಲು ಸುಖ ದುಃಖ

ಗಳು ಉದಯಿಸುತ್ತವೆ. ಅವುಗಳಲ್ಲಿ ಸುಖವು ಅಲ್ಪ. ದುಃಖವೆಂಬ ವಿಷವು ಅಪಾರವಾಗಿ ಹುಟ್ಟಿ ಜೀವನವೆಂಬ ಪಿಂಡಾಂಡವನ್ನೆ ದಹಿಸಲು ಪ್ರಾರಂಭವಾಗುತ್ತದೆ. ಚಿಂತೆ ನ್ಯೂನತೆ ದುಃಖರೂಪ ಆ ವಿಷಯವನ್ನು ಸಹಿಸದೆ ಅಂತರಾತ್ಮ ನನ್ನು ಮೊರೆ ಹೋಗುವವರಿಗೆ ಕಮ್ಮಿಯಿಲ್ಲ. ಆ ಅಂತರಾತ್ಮನ ಕೃಪೆಯ ಬಲದಿಂದ ಆ ಕಷ್ಟನಷ್ಟಗಳನ್ನು ಸಹಿಸಿಕೊಳ್ಳುವ ಶಕ್ತಿ ಸಂಭವಿಸುತ್ತದೆ. ಅಂದಿನಿಂದ ಒಳಿತಾದ ಬಾಳನ್ನು ಬಾಳಲು ಮೊದಲಾಗುತ್ತದೆ. ಇದು ಜೀವನದಲ್ಲಿನ ಉಗಾದಿ.

ಸಂಸಾರಿಯು ತನ್ನ ಮನೆಯಲ್ಲಿ ಒದಗುವ ಕುಂದು ಕೊರತೆಗಳನ್ನು ಮಡದಿ ಮಕ್ಕಳ ವ್ಯಾಜ್ಯಗಳನ್ನು ಒಟ್ಟನಲ್ಲಿ ಸಂಸಾರದ ಗುಟ್ಟನ್ನು ಹೊರಗೆ ಹಾಕಬಾರದು. ಒಳಗೆ ಮನ ಸ್ಸಿಗೂ ತಂದುಕೊಳ್ಳಬಾರದು. ಶಿವನು ವಿಷವನ್ನು ಕಂಠ ಮಧ್ಯದಲ್ಲಿಯೇ ಇರಿಸಿಕೊಂಡಂತೆ ಇರಿಸಿಕೊಳ್ಳಬೇಕು. ತನ್ನ ಸಾಂಸಾರಿಕ ಗುಟ್ಟನ್ನು ಹೊರಗೆ ಹಾಕಿದರೆ ಮಾನ ಮರ್ಯಾದೆ ಗಳು ಹೋಗುತ್ತವೆ. ಮನಸ್ಸಿಗೆ ಹಚ್ಚಿಕೊಂಡರೆ ತನ್ನ ಕೊರಗು ಬಲವಾಗಿ ಕೈಮೀರುತ್ತದೆ. ಪ್ರಾಣಹಾನಿಗೂ ಬೆಂಬಲ ವಾಗುತ್ತದೆ. ಈ ರಹಸ್ಯವನ್ನರಿತು ಪ್ರತಿಯೊಬ್ಬ ಸಂಸಾರಿ

ಬಾಳಬೇಕು. ತನ್ನ ಸಾಂಸಾರಿಕ ತಾಪಗಳನ್ನು ಮಧ್ಯ ರಂಗದಲ್ಲಿಯೆ ಇರಿಸಿ ಸುಧಾರಿಸಬೇಕು.

ಬೇವು ಬೆಲ್ಲದ ಸಮ್ಮಿಲನ ಸಂದೇಶ ಇನ್ನೂ ಉದಾತ್ತ ವಾಗಿದೆ. ಜೀವನದಲ್ಲಿ ಕಹಿ ಹೆಚ್ಚು. ಆದರೂ ಅದಕ್ಕೆ ಜಗ್ಗದೆ ಅದನ್ನೇ ಸಿಹಿಯನ್ನಾಗಿಸಬೇಕು. ಯುಗಾದಿಯ ದಿನ ನಾವು ಬೇವನ್ನು ಬೆಲ್ಲದಲ್ಲಿಟ್ಟು ಸಿಹಿಯಾಗಿಸುತ್ತೇವೆ. ಆದರೆ ಬಾಳಿನ ಕಹಿಯನ್ನೇ ಸಿಹಿಯನ್ನಾಗಿಸುವುದು ಮಾನವನ ಮಹಾ ಕರ್ತವ್ಯ! ಇದರಿಂದ ಮಾನವನು ಮಹಾದೇವನಾಗುತ್ತಾನೆ. ಮಧುರಕಂಠನಾಗುತ್ತಾನೆ. ಆ ನಂಜನ್ನು ಕುಡಿದು ಶಿವನು ನೀಲಕಂಧರನಾದರೆ, ಈ ಕಹಿಯನ್ನು ಸಿಹಿಯನ್ನಾಗಿಸಿ ಸೇವಿಸಿದವನು ಮೇಲು ಕೊರಳನಾಗುತ್ತಾನೆ. ಅಂದರೆ ಅವನ ಮಾತು ಮುತ್ತಾಗುತ್ತದೆ; ಮಾನ್ಯತೆ ಪಡೆಯುತ್ತದೆ.

ಬೇವು ಅಧರಕ್ಕೆ ಕಹಿಯಾಗಿದ್ದು ಉದರಕ್ಕೆ ಸಿಹಿಯಾಗಿರುವಂತೆ ಬಾಳಿನ ಕಹಿಯನ್ನು ಸಿಹಿಯಾಗಿಸಿದ ಮಹಾಪುರುಷನ ವಚನ ಕೇಳಲು ಕಹಿಯಾಗಿದ್ದರೂ ಕೇಳಿ ನಡೆದರೆ ಸಿಹಿಯಾಗಿ ಪರಿಣಮಿಸುತ್ತದೆ. ಅದರಿಂದ "ಕೂ. ಸಂ. ಶರಣರ ವಚನ

ಬೇವು ಸವಿದಂತೆ " ಎಂದು ಬಸವಣ್ಣನವರು ಭಾವಪೂರ್ಣವಾಗಿ ಚಿತ್ರಿಸಿದಾರೆ.

ಈ ದೃಷ್ಟಿಯಿಂದ ದಿಟ್ಟಿಸಿದಾಗ ಬೇವನ್ನು ಬೆಲ್ಲದಲ್ಲಿ ಇಡ ಬೇಕಾಗಿಲ್ಲ. ಬೇವೇ ಬೆಲ್ಲವಾಗುತ್ತದೆಯೆಂಬುದನ್ನು ಅರಿಯ ಬೇಕು. ಅನುಭವಿಸಬೇಕು. 'ಬೇವು-ಬೆಲ್ಲ' ಎಂಬ ಸಮಸ್ತ ಪದವನ್ನು ವ್ಯಸ್ತ ಪದವನ್ನಾಗಿ ಮಾಡಿ ಕೆಡಿಸಬಾರದು. 'ಬೇವೆ ಬೆಲ್ಲ' ಎಂದು ಅರ್ಥಮಾಡಬೇಕು. ಬರೀ ಬೇವನ್ನೇ ಸೇವಿಸ ಬೇಕು. ಇದು 'ಬೇವು ಬೆಲ್ಲ'ದ ಮೂಲಾರ್ಥದ ಗುಟ್ಟು.

'ಬೇವು ಬೆಲ್ಲದೊಳಿಡಲೇನು ಫಲ ?' ಎಂಬ ದಾಸರ ಈ ನುಡಿ ಮೇಲಿನ ಅರ್ಥದಲ್ಲಿ ನೋಡುವದಾದರೆ ಏಕೆ ಹೀಗೆ ಹಾಡಿದರೋ ಎನಿಸುತ್ತದೆ. ನಿಜವಾಗಿಯೂ ವಿಮರ್ಶೆ ಮಾಡಿ ದರೆ ಮುಂದಿನ ಪಂಕ್ತಿಯಲ್ಲಿ ಅದೇ ದಾಸರು ಹೇಳುವ 'ಹಾವಿಗೆ ಹಾಲೆರದೇನು ಫಲ ?' ಎಂಬ ಉಪಮೆಯ ಪಂಕ್ತಿಗೆ ಇದು ಖಚಿತವಾಗಿ ಸೇರತಕ್ಕ ಉಪಮೆಯಲ್ಲ. ಹಾವಿನ ವಿಷದಷ್ಟು ಕೆಟ್ಟದ್ದೆಂಬ ಮಾತೆಲ್ಲಿಂದ ಬರಬೇಕು ? ಇದಲ್ಲದೆ ಸ್ವಯಂ ಸಿಹಿಯಾದ ಬೇವನ್ನು ಬೆಲ್ಲದಲ್ಲಿ ಇಡಬೇಕಾಗಿಲ್ಲ. ಅಧರಕ್ಕೆ ಕಹಿಯಾಗಿ ಕಂಡರೂ ಉಧರಕ್ಕೆ ಸಿಹಿಯಾದ ಬೇವು ಕಹಿ

ಯೆಂದು ಹೇಗೆ ಹೇಳಲಾದೀತು? ಪಾರಮಾರ್ಥಿಕ ದೃಷ್ಟಿಯಿಂದ ವಿಮರ್ಶಾತ್ಮಕ ದೃಷ್ಟಿಯಿಂದ ಅಂತರಂಗಕ್ಕೆ ಸಿಹಿಯಾಗ ಬೇಕಾದುದೇ ನಮಗೆಲ್ಲ ಬೇಕಾದುದು.

ಬೆಲ್ಲ ಮೇಲೆ ರುಚಿಯಾಗಿದೆ. ಒಳಹೊಕ್ಕು ನೋಡಿದರೆ ಬೆಲ್ಲದ ಗುಣ ಬೇಕಾದಷ್ಟು ರೋಗಕ್ಕೆ ಕಾರಣವಾಗಿ ನಿಂತಿದೆ. ಮಿತಿ ತಪ್ಪಿದರೆ ಬೆಲ್ಲದಿಂದ ಉಷ್ಣ, ಭೇದಿ, ಆಮಶಂಕೆ - ಹೆಚ್ಚುತ್ತವೆ. ಹುಳಿ ಬೆಲ್ಲವಾದರೆ ಹೇಳಬೇಕಾಗಿಲ್ಲ. ರೋಗಕ್ಕೆ ಅದೇ ತವರು. ಬೆಲ್ಲ ಅದರಕ್ಕೆ ಸಿಹಿ, ಉದರಕ್ಕೆ ಕಹಿ!

ಶಿವನು ವಿಷವನ್ನು ಅಮೃತದಲ್ಲಿ ಬೆರೆಸಿ ತೆಗೆದುಕೊಳ್ಳಲಿಲ್ಲ. ಬರೀ ವಿಷವನ್ನೇ ಪ್ರಾಶನ ಮಾಡಿದಾನೆ. ಅದರಂತೆ ಬರೀ ಬೇವನ್ನೇ ಸ್ವೀಕರಿಸಬೇಕು. ಸ್ವೀಕರಿಸುವಾಗ ಆ ಕಹಿಗೆ ಮನಕುಂದದೆ ಮಹಾ ಸಂತೋಷದಿಂದ ಬೆಲ್ಲದಂತೆ ಮೆಲ್ಲಬೇಕು. ಬೇವು ಉಷ್ಣವನ್ನು ಉಪಶಮನ ಮಾಡುತ್ತದೆ. ಎಲ್ಲ ಬಗೆಯ ಜ್ವರಗಳನ್ನು ಜೀರ್ಣಿಸುತ್ತದೆ. ಮೇಹ ಜಾಡ್ಯವನ್ನು ಮಾಯ ಮಾಡುತ್ತದೆ. ಬೇವನ್ನು ತಪ್ಪದೆ ಹನ್ನೆರಡು ವರ್ಷ ಸೇವಿಸಿದರೆ ಹಾವು-ಚೇಳುಗಳ ನಂಜು ಏರುವುದಿಲ್ಲ. ಬೇರೆ ಯಾವ ಬಗೆಯ ವಿಷಪ್ರಯೋಗವೂ ಕೆಲಸ ಮಾಡುವುದಿಲ್ಲ. ಬೇವು

ಸೇವನೆಯಿಂದ ಬೇಕಾದಷ್ಟು ಗುಣಗಳಿವೆ. ಬೇವು ಅದೊಂದು ಬೃಹತ್ತ್ವಾದ ಕಲ್ಪ !

ಯುಗಾದಿಯ ದಿನ ಮಾತ್ರ ಬೇವನ್ನು ಸೇವಿಸಿಬಿಡ ಬಾರದು. ಆರೋಗ್ಯದ ಅಭಿಲಾಷೆಯುಳ್ಳವರು ಬೇವಿನ ಹೂವು ದೊರೆಯುವವರೆವಿಗೂ ಬೇವನ್ನು ಸೇವಿಸಬೇಕು. ಬೇವಿನ ಕಹಿಯೇ ಜೀವನಕ್ಕೆ ದಿಟವಾದ ಸಿಹಿ ! ಬೇವನ್ನು ಬಿಟ್ಟು ಬರೀ ಬೆಲ್ಲವನ್ನು ಸೇವಿಸುವುದು ಸಂಸಾರವನ್ನು ಬಿಟ್ಟು ಬರೀ ಸನ್ಯಾಸ ವನ್ನು ಸ್ವೀಕರಿಸುವ ಸಾಹಸದಂತೆ ! ವಿಚಾರಿಸಿದರೆ ಈ ಮರ್ತ್ಯ ಲೋಕದಲ್ಲಿ ಸಂಸಾರವನ್ನು ಬಿಟ್ಟು ಯಾವ ಸನ್ಯಾಸಿಯೂ ಇರಲು ಸಾಧ್ಯವೇ ಇಲ್ಲ. ಈ ಲೋಕವೇ ಒಂದು ಮಹಾ ಸಂಸಾರ !

ಎರಡನೆಯದಾಗಿ ನಾವು ಭಾವಿಸಿಕೊಂಡಿರುವ ಮನೆ ಮಡದಿ ಮಕ್ಕಳು ಮಾತ್ರವೇ ಸಂಸಾರವಲ್ಲ. ಇವನ್ನು ಮಾತ್ರ ಬಿಟ್ಟರೆ ಸನ್ಯಾಸವಲ್ಲ. ಮೈ, ಮನ; ಪ್ರಾಣಗಳ ವ್ಯಾಮೋಹ ವನ್ನೂ ಬಿಡಬೇಕು. ಮಣ್ಣಿನ ಮನೆಯನ್ನು ಬಿಡಬಹುದು ಮೈಯನ್ನು ಬಿಟ್ಟವರಾರು ? ಮಡದಿಯನ್ನು ಬಿಡಬಹುದು ಮತಿಯೆಂಬ ಸತಿಗೆ ಮೋಹಿಸದವರಾರು ? ಮಕ್ಕಳ ಮಮತೆ ಯನ್ನು ಪರಿಹರಿಸಬಹುದು ಪ್ರಾಣಗಳ ಪ್ರೇಮವನ್ನು ತೊರೆದವ

ರಾರು ? ಮೈ, ಮನ, ಪ್ರಾಣಗಳ ಮೋಹ ಸಂಸಾರವಲ್ಲವೆ ? ಇವಿರುವವರೆವಿಗೆ ಸಂಸಾರ ಬಿಟ್ಟ ಬಗೆಯೆಂತು ?

ವಿಚಾರ ಪಥದಲ್ಲಿ ಹೇಗೆ ಪ್ರತಿ ಜೀವಿಗೆ ಸಂಸಾರ ಅನಿವಾರ್ಯ. ಕಹಿಯೂ ಆರೋಗ್ಯದ ಒಂದು ಅಂಗ. ಷಡ್ರಸಗಳಲ್ಲಿ ಒಂದು. ಕಹಿಯಲ್ಲದ ಸಿಹಿ ರೋಗಗಳ ತವರು.

ಕಾಳೆಗೆಗಳು, ಕಾಳೆಗದಲ್ಲಿ ಕೈಗೂಡುವ ಜಯಾಪಜಯಗಳು ಲೋಕಕ್ಕೆ ಕಂಟಕ ಪ್ರಾಯಗಳು. ಯುದ್ಧಗಳಿಂದ ಶಾಂತಿಗೆ ಬದಲು ಕ್ರಾಂತಿ ಅಶಾಂತಿಗಳು ಹುಟ್ಟುತ್ತವೆ. ಅರ್ಥ ಪ್ರಾಣಿಗಳ ಅಪಹರಣೆ ನಡೆಯುತ್ತದೆ. ಹಿಂದೊಮ್ಮೆ ದೇವದಾನವರೆಂಬವರ ಯುದ್ಧದಿಂದ ಈ ಪ್ರಸಕ್ತಿ ಸಂಭವಿಸಿತು. ದೇವತೆಗಳ ಐಶ್ವರ್ಯವೆಲ್ಲ ನೀರಪಾಲಾದುದಲ್ಲದೆ ಜಗದ ಜೀವಿಗಳ ಪ್ರಾಣಗಳೆಲ್ಲ ವಿಷಕ್ಕೆ ತುತ್ತಾಗಿ ಆ ವಿಷಜನ್ಯ ಪ್ರಳಯಾಗ್ನಿಯಲ್ಲಿ ಸುಟ್ಟುಬೂದಿಯಾಗುವ ಸಮಯ ಸಂಪ್ರಾಪ್ತವಾಯಿತು. ಅದನ್ನು ನಿವಾರಿಸುವ ಸಮರ್ಧರು ಯಾರೂ ಇಲ್ಲವಾದರು. ಇದ್ದರೂ ತಮ್ಮ ಪ್ರಾಣಭೀತಿ ಮುಂದಾಯಿತು. ಆ ವಿಷಪ್ರಾಶನ ಕಷ್ಟಕ್ಕೆ ಮನಸ್ಸು ಮಾಡುವವರಿಲ್ಲವಾಯಿತು. ಲೋಕ ಹಿತ

ವನ್ನು ನೆನೆದು ಸ್ವಾರ್ಥಕ್ಕೆ ತಿಲಾಂಜಲಿ ಬಿಡುವವರಿಲ್ಲವಾಯಿತು. ಲೋಕದ ಗೋಳನ್ನು ಕೇಳುವವರಿಲ್ಲವಾಯಿತು.

ಮಹಾಜ್ವಾಲೆ ಮೂರು ಲೋಕವನ್ನೇ ಕಬಳಿಸಲು ಮುಂದುವರಿಯುತ್ತದೆ, ಘೋರ್ಗರೆಯುತ್ತದೆ. ಆಗ ಸುರರೆಲ್ಲರೂ ಹೋಗಿ ಶಿವನನ್ನು ಮೊರೆಯಿಡುವರು. ಶಿವನು ದೀನಜನ ದಯಾಳು. ಸ್ವಾರ್ಥತ್ಯಾಗಿ ; ಪರಾರ್ಥ ಪರಾಯಣಯೋಗಿ. ಅದ ರಿಂದ ಅವರ ಅಭ್ಯರ್ಥನೆಯನ್ನು ಅಂಗೀಕರಿಸಿದನು. ತ್ರಿಲೋಕ ವನ್ನು ತಿಂದು ಭಸ್ಮ ಮಾಡುವ ಹಾಲಾಹಲ ವಿಷವನ್ನು ಕುಡಿ ಯಲು ಒಡಂಬಡುವನು. ತನಗೆ ಕಷ್ಟವಾದರೂ ಲೋಕಕ್ಕೆ ಹಿತವಾಗಲೆಂದು ಸಂಕಲ್ಪಿಸಿದನು. ಭುಗಿಭುಗಿಲೆಂದು ಭುವನ ವನ್ನೇ ಬೇಯಿಸ ಹೊರಟ ಕಾಳ್ಗಿಚ್ಚನ್ನು ಶೀತಜಲದಂತೆ ಮಾಡಿ ಹಾಲಾಹಲ ವಿಷವನ್ನು ಅಮೃತವಾಗಿಸಿ ಪಾನಮಾಡುವನು. ಪ್ರಪಂಚ ಬದುಕುವುದು. ಅಂದು ಪ್ರಪಂಚವನ್ನು ಬದುಕಿಸಿದ ಭಗವಂತನೊಬ್ಬನೆ ಆ ಪರಶಿವನು. ಇಂದಿಗೂ ಮುಂದಕ್ಕೂ ಆತನೆ !

ಅಂತಹ ಜಗದ್ಧಿತಕಾರಿಯಾದ ಭಗವಂತನಾದ ಈಶ್ವರ ನನ್ನು ಇಂದು ಬಹುಮಂದಿ ಮರೆತೆವು. ಭಾರತ ದೇಶವನ್ನೂ

ಮರೆತೆವು. ಪರದಾಸ್ಯ ದಳ್ಳುರಿಯಲ್ಲಿ ಬಿದ್ದೆವು. ಅಂದು ಆ ವಿಷದ ಉರಿಯಿಂದ ಉಳಿದೆವು. ಇಂದು ದಾಸ್ಯದಳ್ಳುರಿ ಯಲ್ಲಿ ಬೆಂದು ಬಸವಳಿದಿಹೆವು. ನಮ್ಮ ಸಂಸ್ಕೃತಿ ನಮಗೆ ಬೇವಾಯ್ತು. ಪರರ ಸಂಸ್ಕೃತಿ ನಮಗೆ ಬೆಲ್ಲವಾಯ್ತು, ಆಗಿದೆ. ಇದು ಸೋಜಿಗವಲ್ಲವೆ? ಸಾಲದ್ದಕ್ಕೆ ನಮ್ಮ ಸಂಸ್ಕೃತಿ ನಮ್ಮ ಸಾಹಿತ್ಯ ನಮಗೆ ಬೇವಾಗಿದ್ದರೂ ಪರವಾಯಿರಲಿಲ್ಲ. ಅವನ್ನು ಒಯ್ದು ಪರಕೀಯರ ಸಂಸ್ಕೃತಿ ಸಾಹಿತ್ಯರೂಪ ಬೆಲ್ಲದಲ್ಲಿ ಇಡಲು (ಹೂಣಲು) ಪ್ರಯತ್ನಿಸುತ್ತಿದ್ದೇವೆ. ಏನು ಫಲ? ಇದಕ್ಕಾ ಗಿಯೆ ನಮ್ಮ ದಾಸರು ಹೀಗೆ ಹಾಡಿದರೇನೊ? 'ಬೇವು ಬೆಲ್ಲ ದೊಳಿಡಲೇನು ಫಲ?' – ಈ ಅರ್ಥದಲ್ಲಿ ಈ ಮಾತು ತುಂಬಾ ಸಾರ್ಥಕವಾದುದು, ಅರ್ಥಪೂರ್ಣವಾದುದು. ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳಲ್ಲಿ ನಮ್ಮ ಸಾಹಿತ್ಯಸಂಸ್ಕೃತಿಗಳು ಕಹಿಯೆಂದು ತಿಳಿದು ಹುದಿಗಿಸುವದಕ್ಕಿಂತಲೂ ಆತ್ಮಘಾತಕತನ ಬೇರೆ ಮತ್ತೊಂದಿಲ್ಲ.

ನಮ್ಮದು ನಮ್ಮ ಮನೆಯದು ಬೇವಾದರೂ ಅದೇ ಬೆಲ್ಲ ವೆಂದು ಭಾವಿಸಿ ಸೇವಿಸಬೇಕು. ಸೇವಿಸಿದಲ್ಲಿ ನಿಜವಾಗಿಯೂ ಸಿಹಿಯಾಗಬಲ್ಲುದು. ಈ ಸಂದೇಶವನ್ನು ತಾನಾಚರಿಸಿ ತೋರಿ

ಬೇರಿದಾನೆ ಪರಶಿವನು. ಆ ಶಿವನ ಸ್ಮಾರಕಕ್ಕಾಗಿಯಾದರೂ ನಮ್ಮ ಸಾಹಿತ್ಯ ಸಂಸ್ಕೃತಿಯೆಂಬ ಉದರಕ್ಕೆ ಸಿಹಿಯಾದ ಬೇವನ್ನೇ ನಾವು ಮೆಲ್ಲಬೇಡವೆ? ಅಗತ್ಯ ಮೆಲ್ಲುವಂತಾಗ ಬೇಕು. ಪರರ ಸಾಹಿತ್ಯ ಸಂಸ್ಕೃತಿ ರೂಪ ಹುಳಿಬೆಲ್ಲದಲ್ಲಿ ನಮ್ಮ ಬೇವನ್ನಿಡುವ ವ್ಯರ್ಥ ಸಾಹಸವನ್ನು ಅದೆಂದೆಗೂ ಮಾಡಬಾರದು. ಮಾಡಿದರೂ ಫಲವಿಲ್ಲ.

ನಮ್ಮ ಸ್ವಾತಂತ್ರ್ಯವೆಂಬ ಸಂಪತ್ತನ್ನು ಕಡಲಲ್ಲಿ (ಪಾಶ್ಚಾತ್ಯರ ಸೆರಗಿನಲ್ಲಿ) ಹಾಕಿದ್ದೆವು. ಕಷ್ಟಪಟ್ಟು ಸತ್ಯಾಗ್ರಹರೂಪ ಮಂಥನದಿಂದ ಹೊರದೆಗೆಯಲಾಯಿತು. ಆ ಸಮಯದಲ್ಲಿ ಅದೆಷ್ಟೋ ವಿಷ ಹುಟ್ಟಿತು. ಈಗಲೂ ಆ ವಿಷ ಅನೇಕ ಸಮಸ್ಯೆಗಳ ಮೂಲಕ ದಹಿಸುತ್ತಿದೆ. ಅದನ್ನು ಪ್ರಾಶನಮಾಡಿ ಕಂಠದಲ್ಲಿರಿಸಿಕೊಳ್ಳುವ ಭಾರ ಪ್ರತಿಯೊಬ್ಬ ಭಾರತೀಯನ ಪಾಲಿಗೆ ಬಂದಿದೆ. ಪ್ರತಿಯೊಬ್ಬನು ಶಿವಭಕ್ತನಾಗಿ ಶಿವನ ಕಾಯಕವನ್ನು ಮಾಡಬೇಕಾಗಿದೆ. ಶಿವಸ್ವರೂಪರಾಗಬೇಕಾಗಿದೆ.

ನಮ್ಮ ಸಾಹಿತ್ಯಕ್ಕೂ ಸಂಸ್ಕೃತಿಗೂ ಇದೇ ಗತಿ ಒದಗಿದೆ. ಪರರ ಸಾಹಿತ್ಯವನ್ನು ನಾವು ಉಗುಳುವುದು ಬೇಡ. ಒಳಕ್ಕೆ ನುಂಗುವುದೂ ಬೇಡ. ನಮ್ಮ ಸಾಹಿತ್ಯಕ್ಕೇನೆ ನಮ್ಮ ಹೊಟ್ಟೆ

ಯಲ್ಲಿ ಸ್ಥಳ ಸಾಲದಾಗಿದೆ. ನಮ್ಮ ಸಂಸ್ಕೃತಿಗೆ ನಮ್ಮಲ್ಲಿ ಉಳಿವಿಲ್ಲದಾಗಿದೆ. ಹೀಗಿರುವಾಗ ಪರಕೀಯರ ಸಾಹಿತ್ಯ ಸಂಸ್ಕೃತಿಗಳ ವಿಷಯವಾಗಿ ವಿಶೇಷ ಸ್ಥಳಕ್ಕೆ ಅವಕಾಶವೆಲ್ಲಿ ?

ಇಂದಿಗೂ ಪರಕೀಯತೆ ನಮಗೆ ಬೆಲ್ಲವಾಗಿ ಬಂದು ಪಕ್ಕದಲ್ಲಿ ತಾವನ್ನು ವಿಂಗಡಿಸಿಕೊಳ್ಳುತ್ತಿದೆ. ತನ್ನ ಉಷ್ಣದಿಂದ ನಮ್ಮ ಹೃದಯ ನವನೀತವನ್ನು ಕರಗಿಸಿ ನೀರಾಗಿಸುತ್ತಿದೆ. ಕೈಗೆ ಆಟುಕದಂತೆ ಮಾಡುತ್ತಿದೆ. ಬೆಲ್ಲವ ತಿಂದ ಕೋಡಗನಂತೆ ಅದಕ್ಕೆ ನಾವು ಎಳಸುತ್ತಿದೇವೆ. ಉಷ್ಣಭೇದಿಯಾಗುವ ಎಚ್ಚರ ನಮಗಿಲ್ಲದಾಗಿದೆ. ನಮ್ಮ ಮನಸ್ಸಿಗೆ ಬಾರದಾಗಿದೆ. ಆದ್ದರಿಂದ 'ಬೆಲ್ಲವ ತಿಂದ ಕೋಡಗನಂತೆ ಹಿಂದಕ್ಕೆಳಸದಿರಾ ಮನವೆ!' ಎಂದು ಅಣ್ಣ ಬಸವಣ್ಣ ಬೋಧಿಸಿದಾನೆ.

ಪರರನ್ನು ಓಡಿಸಿ ಪರರ ಸಾಹಿತ್ಯ ಸಂಸ್ಕೃತಿರೂಪ ಬೆಲ್ಲಕ್ಕೆ ಮನಸ್ಸನ್ನು ಎಳಸುವ ನಮಗೆ ಈ ಬಸವಣ್ಣನ ಬೋಧೆ ನಿಜವಾಗಿಯೂ ಸಮರ್ಪಕವಾಗಿದೆ.

ವಿಷ ಪ್ರಾಶನಮಾಡಿ ವಿಶ್ವವನ್ನುಳಿಸಿದ ಶಿವನಿಗಿಂತ ಬೇರೆ ದೇವನಿಲ್ಲ. ಪ್ರತಿ ಜೀವಿಯು ವಿರೂಪಾಕ್ಷರಕ್ಷಿತವಾದುದು. ಯುಗಾದಿಯು, ಶಿವನಿಂದ ಸೃಷ್ಟಿಯನ್ನು ಶಿವನಿಂದ ಸ್ಥಿತಿಯನ್ನು

ಲಯವನ್ನು ಬೋಧಿಸುತ್ತದೆ. ಹೀಗಿರುವಾಗ ಸೃಷ್ಟಿ ಶಿವಮ ಯವಾದುದು ಶಿವೋಪಕಾರಕ್ಕೆ ಒಳಗಾದುದು ಶಿವೋಪಾಸನೆಗೆ ಒಗ್ಗಿದುದು. ಯುಗಾದಿ ಶೈವ ಸಂಸ್ಕೃತಿಯ ಬುನಾದಿ. ಶೈವ ಸಾಹಿತ್ಯದ ಮೂಲಬೀಜ. ಶೈವಕಥನ ಕಲೆಗೆ ನೆಲೆ. ಶಿವ ಸರ್ವೋತ್ತಮಿಕೆಯ ಹೆಗ್ಗುರುತು. ಶೈವ ಪ್ರಕಾಶದ ಬಿಂಬ. ಶೈವ ಸಂಸ್ಕೃತಿಯ ಕಲ್ಪತರು. ಶೈವ ಸಾಹಿತ್ಯದ ಕಾಮಧೇನು. ಶೈವಧರ್ಮದ ಚಿಂತಾಮಣಿ, ಶೈವಸಿಂಧು. ಶೈವ ಬಂಧು. ಹೆಚ್ಚೇನು ಯುಗಾದಿ, ಶೈವ ಸರ್ವಸ್ವ. ಶೈವವಿಶ್ವ.

ಶೈವ ಸಂಸ್ಕೃತಿಯ ಉಚ್ಛ್ರಾಯಸ್ಥಿತಿ ಹಿಂದಿನದು. ಇಂದು ಹ್ರಾಸಸ್ಥಿತಿಯಲ್ಲಿದೆ. ದಿನೇ ದಿನೇ ಕಡಿಮೆಯಾಗುತ್ತಿದೆ.

ಶೈವ ಶಶಿಯನ್ನು ಮೋಡಗಳು ಮುಸುಗುತ್ತಿವೆ. ಮರೆ ಮಾಡುತ್ತಿವೆ. ಆ ಕಾರ್ಮೋಡಗಳನ್ನು ಚದರಿಸುವ ಬಿರುಗಾಳಿ ಈಗ ಬೇಕಾಗಿದೆ. ಆದರೆ ಆ ಗಾಳಿ ಯಾವ ದಿಕ್ಕಿನಿಂದ ಬರು ವುದೊ ಯಾವ ಕಾಲಕ್ಕೆ ಒದಗುವುದೋ ಕಾಯ್ದು ನೋಡ ಬೇಕಾಗಿದೆ.

ಮೋಡ ಮಾತ್ರ ಮುಸುಗಿಲ್ಲ ರಾಹು ಸರ್ವಗ್ರಾಸಿಯಾಗಿ ನುಂಗುತ್ತಿದೆ. ಶಶಿಕಲೆಗಳೆಂದರೆ ಬಾಯಿಹಾಕದವರಾರು ?

ಬಯಸದವರಾರು ? ಆದರೆ ಶಶಿಯು ಪೂರ್ಣಗ್ರಾಸಿಯಾದರೆ ಗತಿ ಯೇನು ?

ಶಿವನು ಶಶಿಮಾತ್ರನಲ್ಲ. ರವಿಯೂ ಆಗಿದಾನೆ. ಸೂರ್ಯೇಂದುಸಂಗವಾಗಿರುದರಿಂದಲೊ ಏನೋ ಶೈವ ಸಂಸ್ಕೃತಿಗೆ ಇಂದು ಅಮಾವಾಸ್ಯೆ ಆವರಿಸಿರುವುದು. ಶಿವ ಪರಂಜೋತಿ. ಉಳಿದವರು ಆತನ ಜ್ಯೋತಿಯನ್ನು ಎರವಲು ಪಡೆದು ಬಾಳುತ್ತಿದಾರೆ. ಹಾಗಿದ್ದರೂ ಶೈವ ಸಂಸ್ಕೃತಿಯ ಅಲಕ್ಷ್ಯ ನಿರ್ಲಕ್ಷ್ಯ ಉಪೇಕ್ಷೆ ಮಿತಿಮೀರುತ್ತಿದೆ. ಇದು ಚಿಂತನೀಯವಲ್ಲವೆ? ಗಮನೀಯವಲ್ಲವೆ ?

ಒಮ್ಮೆ ಶ್ರೀ ಶಂಕರಾಚಾರ್ಯರು ಶೈವ ಸಂಸ್ಕೃತಿಯ ಧ್ವಜವನ್ನು ಬಾನಿನೆತ್ತರಕೆ ಬಲು ಬಿತ್ತರವಾಗಿ ಹಾರಿಸಿದರು. ಅದಿಂದು ತಳಾತಳಕ್ಕೆ ಇಳಿಯುತ್ತಿದೆ. ಇತರರು ತುಳಿದು ತಳ್ಳುತ್ತಿದ್ದಾರೆ. ಶೈವರು ಕಣ್ಣು ಮುಚ್ಚಿ ಕುಳಿತಿದಾರೆ. ಕೈಕಟ್ಟಿ ನಿಷ್ಕ್ರಿಯರಾಗಿದಾರೆ. ಅರಿವಿಲ್ಲದೆ ಮರವೆಯಲ್ಲಿ ಜೋಂಪಿಸುತ್ತಿದಾರೆ. ಶೈವ ಸಂಸ್ಕೃತಿಯ ದುರ್ದಶೆಯನ್ನು ದಿಟ್ಟೈಸದವರಾಗಿದಾರೆ. ಇಂದು ಮುಂದು ಒದಗಿದ ಒದಗುವ ದುರಂತ ದುರವಸ್ಥೆಗಳನ್ನು ತಿಳಿಯದವರಾಗಿದಾರೆ. ಇದೇ ನಿದ್ದೆಯಲ್ಲಿ ಇದೇ ಆಲಸ್ಯದಲ್ಲಿ ಇದ್ದರೆ

ಒದಗುವ ದುರವಸ್ಥೆ ದುರೂಹ್ಯವಾದುದು. ತಲತಲಾಂತರಕ್ಕೆ ಶೈವ ಧರ್ಮ ಶೈವ ಸಂಸ್ಕೃತಿ ತಲೆಯೆತ್ತದಂತಾಗುತ್ತದೆ. ಇದ ನರಿತು ಈಗಲಾದರೂ ಎಚ್ಚತ್ತರೆ ಎದುರಿಸಿದರೆ ಲೇಸು. ಹಾಗೆ ಮಾಡಿದಾಗ ನಿಜವಾಗಿ ಉಗಾದಿ ಹಬ್ಬವನಾಚರಿಸಿದಂತೆ! ಇತರ ಸಂಸ್ಕೃತಿ ವಿಷಹತಿಯಿಂದ ಉಳಿಸಿದಂತೆ! ಅಂದೇ ನಿಜ ವಾದ ಯುಗಾದಿ. ಈಗ ನಾವಾಚರಿಸುತ್ತಿರುವುದು ಬರೀ ಹೋಳಿಗೆಯ ಔತಣದ ಯುಗಾದಿ ಹಬ್ಬ ಮಾತ್ರ. ಇದಕ್ಕೆ ಸಾಂಸ್ಕೃತಿಕ ದೃಷ್ಟಿ ಕಳಚಿದೆ. ಬರೀ ಸಿಹಿಯೂಟದ ಮೇಲೆ ಶೈವ ಸಂಸ್ಕೃತಿಯ ಗೋರಿ ತಯಾರಾಗಿದೆ. ಹಾಯ್!

## ಟೀ–ಹಾಲು

ಟೀ–ಬೇವು. ಹಾಲು ಬೆಲ್ಲ. ಟೀ ಎಂಬ ಬೇವನ್ನು ಹಾಲೆಂಬ ಬೆಲ್ಲದಲ್ಲಿ ಬೆರಸಲು ಫಲವೇನು? ಫಲವೆಂಬ ಮಾತು ಎಲ್ಲಿಯದು? ಪರಿಮಿತಿಯಿಲ್ಲದ ಕುತ್ಸಿತ ಪರಿಸ್ಥಿತಿ!

ಹಾಲು ತಿರೆಯ ಸೊದೆಯೆನಿಸಿಕೊಂಡಿದೆ. ಅದರಲ್ಲಿಯೂ ಹಸುವಿನ ಹಾಲು. ಹಡೆದ ತಾಯಿ ಹೆತ್ತ ಮಗುವನ್ನು ಮಾತ್ರ ಮೂರು ವರುಷ ತನ್ನ ಎದೆ ಹಾಲಿನಿಂದ ಸಾಕಬಲ್ಲಳು.

ಹಸುವು ತನ್ನ ಮೊಲೆ ಹಾಲಿನಿಂದ ಅದೇ ಮಗುವನ್ನು ಮುಂದೆ ನೂರು ವರುಷ ಸಾಕಿ ಸಲುಹಬಲ್ಲುದು ; ಸಲುಹುತ್ತಿದೆ. ಹಸುವಿನ ಹಾಲಿನಲ್ಲಿ ಹೆಚ್ಚಿನ ಬಲವಿದೆ. ಅದನುಳಿದು ಮಾನವನ ಜೀವನವಿಲ್ಲ. ಪ್ರಕೃತಿ ಪೋಷಣೆಗೆ ಹಸುವಿನ ಹಾಲು ತುಂಬಾ ಸಹಾಯಕವಾಗಿದೆ ; ಅನಿವಾರ್ಯ ಅಮೃತವಾಗಿದೆ. ಅಂತಹ ಅಮೃತಪ್ರಾಯವಾದ ಹಾಲಿನಲ್ಲಿ ಟೀ (ಕಹಿ) ಮಿಶ್ರ ಮಾಡಿ ಕುಡಿಯುವ ದುಶ್ಚಟ ಭಾರತೀಯರಲ್ಲಿ ಅದರಲ್ಲಿ ದಾಕ್ಷಿಣಾತ್ಯರಲ್ಲಿ ತೀವ್ರವಾಗಿ ಬೆಳೆದು ಬಂದಿರುವುದು ತುಂಬಾ ಶೋಚನೀಯವಾದುದು ; ಶೋಷಣೀಯವಾದದು.

ಹಾಲು ಬೆಲ್ಲ ಕೂಡಿ ಕುಡಿಯುವ ಕಲಿಗಳಾಗುವ ಕಾಲ ಕಳೆದು ಹೋಗಿ ಹಾಲ ವಿಷ-(ಟೀ) ಕೂಡಿ ಕುಡಿದು ಉಷ್ಣ ವ್ಯಾಧಿಗಳಿಂದ ನರಳುವ ಕಾಲ ಸನ್ನಿಹಿತವಾದುದು ಶೋಚನೀಯವಲ್ಲದೆ ಮತ್ತೇನು ?

ಟೀಯಲ್ಲಿ ಅಪಾರ ವಿಷವಿದೆಯೆಂದು ವಿಜ್ಞಾನಿಗಳು ಗುರುತಿಸಿದಾರೆ. ಅದರ ರಸವನ್ನು ಚರ್ಮದ ಮೇಲೆ ಚಲ್ಲಿದರೆ ಆ ಚರ್ಮದಲ್ಲಿ ಅದು ಬಿದ್ದ ಸ್ಥಳದಲ್ಲಿ ಛಿದ್ರ ಬೀಳುತ್ತದೆಯೆಂದು ಪರೀಕ್ಷಿಸಲಾಗಿದೆಯಂತೆ ! ಇಂತಹ ಘೋರವಾದ ವಿಷವನ್ನು

ಹಾಲು ಬೆಲ್ಲಗಳಲ್ಲಿ ಹಾಕಿ ಕುಡಿದು ಹೊಟ್ಟೆಯ ಹಲವು ಬಗೆಯ ಬೇನೆಗಳಿಗೆ ತುತ್ತಾಗುತ್ತಿರುವುದು ಶೋಷಣೆಯಲ್ಲವೇನು?

ಜೇವು ಬೆಲ್ಲಗಳನ್ನು ಕೂಡಿಸಿ ಬೇಸಿಗೆಯಲ್ಲಿ ತಿನ್ನುವುದು ಎಲ್ಲ ಬಗೆಯಲ್ಲಿಯೂ ಉಚಿತ. ಟೀ–ಹಾಲುಗಳನ್ನು ಕೂಡಿಸಿ ಕುಡಿಯುವುದು ಅದರಂತೆ ಸರ್ವವಿಧದಲ್ಲಿ ಅನುಚಿತ.

ಮದ್ಯಪಾನವು ಹೇಗೆ ನಿಷೇಧವೋ ಟೀ ಪಾನವೂ ಅಷ್ಟೇ ನಿಷೇಧ, ಅಷ್ಟೇ ದುಶ್ಚಟ. ಆದರೂ ಮದ್ಯಪಾನಕ್ಕಿಂತ ಮುಂದು ವರಿದಿದೆ ಟೀ ಪಾನ! ಇದು ಭಾರತದ ಭಾಗ್ಯಹೀನತೆ! ಭಾರತ ಸಂಸ್ಕೃತಿಯ ಅಧಃ ಪಾತತೆ! ಆರೋಗ್ಯಹೀನತೆ! ಅನಿಷ್ಟ ವಿವರ್ಧತೆ!

ಟೀ ಕುಡಿಯುವ ಚಟ ಮಿತಿಮೀರಿದೆ. ಅಂಥವರ ತೇಜಸ್ಸು ಬಸಿದು ಮುಖ ಕಪ್ಪಿಟ್ಟು ಕಳೆಗುಂದುವರೆಂಬುದನ್ನು ಗಮನಿಸ ಬೇಕು. ಸರ್ವಥಾ ಟೀ ಉಷ್ಣವಲಯದ ಪಾನೀಯವಲ್ಲ. ಬರೀ ಟೀ ಕುಡಿಯುವುದು ಅದಾರಿಂದ ಸಾಧ್ಯವಿಲ್ಲ. ಅದಕ್ಕೆ ರುಚಿ ಬರಲು ಸಕ್ಕರೆಯನ್ನು ಮಧುರತೆ ಬರಲು ಕ್ಷೀರನ್ನು ಬೆರಸು ತ್ತಾರೆ. ಕ್ಷೀರನ್ನು ದುರುಪಯೋಗಪಡಿಸುತ್ತಾರೆ. ಯುಗಾದಿ ಯನ್ನಾಚರಿಸುವವರು ಸರ್ವಥಾ ಟೀ ಹಾಲು ಕೂಡಿಸಿ ಕುಡಿಯ

ಬಾರದು. ಈ ಪ್ರತಿಜ್ಞೆಯನ್ನು ಮಾಡಿ ಬೇವು-ಬೆಲ್ಲಗಳ ಪಾನೀಯವನ್ನು ಪ್ರಾರಂಭಿಸಬೇಕು.

ಕಾಫೀ ಮತ್ತೊಂದು ಕೇಡಾಳಿ! ಟೀಯುಷ್ಟಲ್ಲದಿದ್ದರೂ ಕಾಫೀ ಕುಡಿಯುವದರಿಂದ ಯಾವ ಫಲವಿಲ್ಲ. ಮಲೆನಾಡಿನವರು ಮಳೆಗಾಲಿನಲ್ಲಿ ಬಳಸಬಹುದೇ ವಿನಹ ಉಳಿದ ಉಷ್ಣವಲಯುದವರು ಉಪಯೋಗಿಸುವುದು ಉಚಿತವಲ್ಲ. ಬಲಹೀನತೆಗೆ ತವರು ಕಾಫೀ. ಕ್ಷಯಕ್ಕೆ ಮೂಲ ಕಾಫೀ-ಟೀಗಳೆರಡು. ಹಾವಿನ ವಿಷಕ್ಕಿಂತ ಕೆಟ್ಟವು. ಕಾರಣ ಕಾಫೀ-ಟೀಗಳೆರಡನ್ನು ಬಿಡುವುದೇ ನಿಜವಾದ ಸಮುದ್ರಮಂಥನ ಜನ್ಯ ಉರಗವಿಷವನ್ನು ತ್ಯಜಿಸಿದಂತೆ! ಕಡಲ ಕಡೆದು ಹುಟ್ಟಿದ ನಂಜಿನ ಕಾಳ್ಕಿಚ್ಚಿನಂತೆ ಬಿಸಿಯಾದುದು ಕಾಫೀ ಟೀಗಳ ಉಷ್ಣಪರಿಣಾಮ ; ದುಷ್ಪರಿಣಾಮ. ಅದು ಹೊರಗಿನ ಉರಿ ; ಇದು ಒಳಗಿನ ಉರಿ. ಇದರಿಂದ ಜನತೆ ಸುಟ್ಟು ಭಸ್ಮವಾಗುತಿದೆ, ಕುಡಿಯುವವರ ಒಡಲುಗಳು ಧಗಧಗಿಸುತ್ತಿವೆ. ಸಂತತಿ ದುರ್ಬಲವಾಗುತಿದೆ. ಈ ಮಹಾ ವಿಷವನ್ನು ಈ ಮಹಾ ಉಷ್ಣವನ್ನು ಪಾನಮಾಡುವ (ನಿಲ್ಲಿಸುವ) ಶಿವನು ಇನ್ನಾವನು ಬರುತ್ತಾನೋ?

ಆ ಹೊಸಚೇತನದ ಯುಗವನ್ನು ತರುತ್ತಾನೋ ? ನಿರೀಕ್ಷಿಸಬೇಕಾಗಿದೆ.

ಮಾನವ ಜೀವನಕ್ಕೆ ಪುಷ್ಟಿಯನ್ನು ತುಷ್ಟಿಯನ್ನು ಕೊಡತಕ್ಕದು ಗೋಕ್ಷೀರ. ಅಷ್ಟೇ ಅಲ್ಲ, ಗಂಜಳ, ಸಗಣಿ – ಅದರ ಪ್ರತಿಯೊಂದೂ ಪ್ರಯೋಜನಕಾರಿಯಾಗಿದೆ. ಗೋವು ಭೂಲೋಕದ ಕಾಮಧೇನು. ಭಾರತಕ್ಕಂತು ಪರಮಪವಿತ್ರವಾದುದು. ಗೋಮಾತೆಯೆಂದು ಭಾವಿಸುವಷ್ಟು ಮೇಲ್ಮಟ್ಟದಲ್ಲದೆ. ಅಂತಹ ಗೋವಧೆಯು ತುಂಬಾ ನಿಷೇಧವಾದುದು. ಗೋರಕ್ಷಣೆಯು ರಾಷ್ಟ್ರದ ಏಳ್ಗೆಗೆ ಕಾರಣವಾದುದು. ಹಸುಗಳ ತಳಿಗೆಗಳನ್ನು ಉತ್ತಮ ರೀತಿಯಲ್ಲಿ ರಕ್ಷಿಸಿ ಅಭಿವರ್ಧಿಸಿ ಸಮೃದ್ಧಿಯಾಗಿ ಹಾಲನ್ನು ಪಡೆಯುವಂತಾದುದೇ ನಿಜವಾದ ಯುಗಾದಿ! ಕಾಫೀ, ಟೀ ರೂಪ ವಿಷವನ್ನು ಬಿಟ್ಟು ಬರೀ ಕ್ಷೀರಾಮೃತಪಾನ ಮಾಡುವ ಯುಗಾದಿ ಹಬ್ಬ ಭಾರತಕ್ಕೆ ಬೇಗ ಬರುವಂತಾಗಲಿ ! ಇದುವೇ ನಮ್ಮ ಸಂಸ್ಕೃತಿ ; ಸಂಧೃತಿ.

## ಕಹಿ–ಸಿಹಿ ಮಾತು

ಮಾತಿನಿಂದ ಮೊದಲಾಗುತ್ತದೆ ಮಾನವತೆ ! ಮುಂದರಿದು ಆ ಮಾತನ್ನೇ ಜ್ಯೋತಿರ್ಲಿಂಗವಾಗಿಸಿದರು ಶಿವ ಶರಣರು.

ಮಾತಿನ ಮಹತ್ವಕ್ಕೆ ಮಿತಿಯಿಲ್ಲ. ಮಾತಿಂದ ಮಿತ್ರ ಶತ್ರು ಗಳುಂಟು. ಇಹ ಪರವುಂಟು. ಸತ್ಯವ ನುಡಿವುದೇ ಸ್ವರ್ಗ ಲೋಕ ಮಿಥ್ಯವನುಡಿವುದೇ ಮರ್ತ್ಯಲೋಕ–ಅಲ್ಲವೆ? ಸುಳ್ಳು ಕಹಿ; ದಿಟ ಸಿಹಿ. ಮಿಥ್ಯ ಅಪಥ್ಯ; ಸತ್ಯ ಪಥ್ಯ. ಇದೊಂದು ಬಗೆ!

ಇನ್ನೊಂದು ಬಗೆಯಲ್ಲಿ ಯೋಚಿಸಿದರೆ ಕಹಿ ಮಾತುಗಳೂ ಆವಶ್ಯಕ. ಹಿತವಚನಗಳು ಕಹಿಯಂತೆ ಕಾಣುತ್ತವೆ. ಪರಿಣಾ ಮದಲ್ಲಿ ಸಿಹಿಯಾಗಿರುತ್ತವೆ. 'ಅಧರಕ್ಕೆ ಕಹಿ; ಉದರಕ್ಕೆ ಸಿಹಿ ಕೂಡಲ ಸಂಗನಶರಣರ ವಚನ.' ಎಂಬುದನ್ನು ಗಮನಿಸಿಬೇಕು. ಇಂತಹ ಮಾತುಯಾರಿಗೆ ಬೇಡ? ಕಹಿಯಾಗುವದೆಂತು?

ಸುಳ್ಳು ಹಮ್ಮು, ಒರಟುತನಗಳಿಂದ ಕೂಡಿದ ಮಾತು ಗಳು ನಿಜವಾಗಿಯೂ ನಂಜು. ಅವುಗಳಿಂದ ಅದಾವ ಹಿತ ವಿಲ್ಲ. ಸತ್ಯ, ಮೃದು ಮೈತ್ರಿ, ನಿರಹಂಕಾರಗಳಿಂದೊಡಗೂಡಿದ ಮಾತು ಅಮೃತಕ್ಕೆ ಮಿಗಿಲು 'ಶ್ರೀಗುರು ವಚನದಿಂದಧಿಕ–ಸುಧೆ ಯುಂಟೆ?' ಎಂದು ನಿಜಗುಣರ ನಿಜಸಂದೇಶ.

ಈ ಅಲ್ಪ ವಿವರಣೆಯಿಂದ ಮಾತು ಸಿಹಿ ಕಹಿಯಾಗಿವೆ. ಆದರೆ ಸಿಹಿ ಕಹಿಗಳ ಸಂದರ್ಭವನ್ನು ಗಮನಿಸಬೇಕು. ಅನೀತಿ

ವಂತನಿಗೆ ನೀತಿಯನುಡಿಗಳು ಕಹಿಯಾಗಿ ಕಂಡರೂ ಕಹಿಯಲ್ಲ. ನೀತಿವಂತನಿಗೆ ಅನೀತಿಯ ನುಡಿಗಳು ಖಚಿತವಾಗಿಯೂ ಕಹಿಯಾಗುತ್ತವೆ, ಇದು ಕಹಿ–ಸಿಹಿಗಳ ಸಂದಿ

ನಲ್ನುಡಿ–ಮೆಲ್ನುಡಿಗಳು ಜೀವನಕ್ಕೆ ಸಂಜೀವಿನಿಗಳು. ಅವುಗಳಲ್ಲಿ ಜೀವಂತ ಅರ್ಥವಿದೆ; ಜ್ವಲಂತ ಅನುಭವವಿದೆ. ಆ ಮಾತುಗಳೆ ಜ್ಯೋತಿರ್ಲಿಂಗಗಳು ಅವುಗಳ ಉಪಾಸನೆಯಿಂದ ಮಾನವನು ಮಹಾದೇವನಾಗುತ್ತನೆ. ಮರ್ತ್ಯನು ಅಮರನಾಗುತ್ತಾನೆ.

"ಶ್ರೀ ಗುರು ವಚನೋಪದೇಶವನು ಆಲಿಸಿದಾಗಳಹುದು ನರರಿಗೆ ಮುಕ್ತಿ" ಈ ನಿಜಗುಣರ ನುಡಿ ಅದನ್ನೆ ಎತ್ತಿ ಸಾರುತ್ತದೆ. ಮುಕ್ತಿಗೆ ಶ್ರೀ ಗುರು ವಚನೋಪದೇಶಕ್ಕಿಂತ ಬೇರೆ ಮತ್ತೊಂದು ಮಾರ್ಗವಿಲ್ಲ. ಶ್ರೀ ಗುರುವಿನ ವಚನಕ್ಕಿಂತ ಹೆಚ್ಚಿನ ಸಿರಿಸಂಪದಗಳಿಲ್ಲ, ಸುರಸುಖಗಳಿಲ್ಲ.

"ಸಿರಿಯನಿತ್ತಡೆ ಒಲ್ಲೆ, ಕರಿಯನಿತ್ತಡೆ ಒಲ್ಲೆ;
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ.
ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥ"

ಸೂಳ್ನುಡಿಗೆ ನಾಟೆ ಮತ್ತೊಂದಿಲ್ಲ. ಅದರ ಸಿಹಿಯನ್ನು ಕಂಡುಂಡವರು ಬೇರೊಂದನ್ನು ಬಯಸರು. ಸತ್ಯರ ನಿಷ್ಠರ ಶಿವಾನುಭಾವಿಗಳ ಸೂಳ್ನುಡಿಗಳ ಸವಿಯನ್ನು ಸವೆಯುವದಕ್ಕಿಂತ ಬೇರೆ ಸೊಗಸಿಲ್ಲ ; ಸೊದೆಯಿಲ್ಲ. ಅವರೊಡನಾಟದಲ್ಲಿ ಕಾಲ ಕಳೆಯುವುದಕ್ಕಿಂತ ಬೇರೆ ಭಾಗ್ಯವಿಲ್ಲ. ಜನ್ಮ ಸಾಫಲ್ಯವಿಲ್ಲ. ಅವರ ನುಡಿ ಸಾಮಾನ್ಯರಿಗೆ ಕಹಿಯಾಗಿ ಕಂಡರೂ ಸತ್ಯ ಸಾಧಕರಿಗೆ ಸುಧೆಯಕ್ಕಿಂತ ಶ್ರೇಷ್ಠವಾಗಿ ಸಿಹಿಯಾಗಿ ಪರಿಣಮಿಸುತ್ತವೆ ; ಅವು ಅವರ ಹೃದಯವನ್ನು ಅರಳಿಸುತ್ತವೆ. ಭಾವವನ್ನು ಬೆಳಗಿಸುತ್ತವೆ. ನಿಬ್ಬೆರಗಾಗಿಸುತ್ತವೆ.

# 'ಕಾಯಿ ಹಣ್ಣು'

ಆಕಾರದಲ್ಲಿ ಇದೊಂದು ಕಿರಿಯ ಪುಸ್ತಕ. ಭಾವಗಳ ಭಾರದಿಂದ ಇದು ಕಿರಿದಾದಂತೆ ಕಾಣುತಿದೆ. ಕಾಯಿಯಂತಿದ್ದ ಓದುಗನು ಓದಿದನಂತರ ಹಣ್ಣಾಗಲು ಹವಣಿಸುವ ಸಾಧನ ವಿದಾಗಿದೆ. ಇಪ್ಪತ್ತು ವರ್ಷಗಳ ನಿಡುಗಾಲವೂ ಶ್ರೀಗಳವರು ಆಚರಿಸಿದ ಸಾಹಿತ್ಯದ ತಪದ ತೇಜಸ್ಸು ಇದರಲ್ಲಿ ಇಡಿಕಿರಿದು ತುಂಬಿಕೊಂಡಿದೆ. ಈ ತಪದ ಪರಿಣಾಮವಾಗಿ ಶ್ರೀಗಳವರ ಕಾಯವು ಕಂದಿಕೃಶವಾಗಿದ್ದರೂ ಭಾವೋನ್ನತಿಯು ಬಹು ಮುಖವಾಗಿ ಬೆಳೆದಿದೆ.

'ಕಾಯಿ ಹಣ್ಣು' ಎಂಬ ಸಣ್ಣ ಹೆಸರು ಈ ಹೊತ್ತಿಗೆ ಗಿದ್ದರೂ ಅದರಲ್ಲಿಯ ವಿಚಾರ ವಾಹಿನಿಯು ಮಾತ್ರ ಹಣ್ಣಾದ ಹೃದಯದಿಂದ ಹೊರಸೂಸಿ ಹರಿಯುತಿದೆ. ಸಾಹಿತ್ಯದ ಸುಂದರ ವಾದ ಶೈಲಿಯು ಜುಳುಜುಳು ಹರಿಯುವ ತಿಳಿನೀರಿನಂತೆ ಸರಾಗ ವಾಗಿ ಸಾಗಿದೆ. ವಾಕ್ಯಗಳು ಚಿಕ್ಕವಾಗಿದ್ದರೂ ಸಾಣೆಗೆ ಹಚ್ಚಿ ಸವರಿದ ಮುತ್ತುಗಳಂತಿವೆ. ಚಿತ್ತದಲ್ಲಿ ಚೈತನ್ಯವನ್ನು ತುಂಬು

ಪಂತಿವೆ. ಪಂಡಿತ ಪಾಮರರ ಪ್ರಸುಪ್ತ ಹೃದಯವನ್ನು ಖಂಡಿತವಾಗಿಯೂ ಕದಡಿಸುವಂತಿವೆ. ಜನಸಾಮಾನ್ಯರ ಜಾಗೃತಿಗಾಗಿ, ನಾಡಿನ ಸಂಸ್ಕೃತಿಯ ಸಂವರ್ಧನೆಗಾಗಿ ಇನ್ನೂ ಇಂತಹ ಅನೇಕ ಗ್ರಂಥಗಳು ಶ್ರೀಗಳವರ ಮಾಟಾದ ಮಾಟದ ಹಸ್ತದಿಂದ ಹೊರಗೆ ಬರಲಿ. 'ತಮಸೊ ಮಾ ಜ್ಯೋತಿರ್ಗಮಯ' ಎಂಬ ಉಪನಿಷತ್ತಿನ ವಾಕ್ಯದಂತೆ ಜನತೆಯನ್ನು ಅಜ್ಞಾನದ ಅಂಧಃಕಾರದಿಂದ ತಿಳಿವಿನ ಬೆಳಕಿಗೊಯ್ಯಲಿ !

**ಸುಬುದ್ಧಿ ಸ್ವಾಮಿ ಹಿರೇಮಠ**
ಬಿ. ಎ; ಎಲ್‌ಎಲ್.ಬಿ. ವಕೀಲ
ಬೈಲಹೊಂಗಲ, ಬೆಳಗಾಂವಿ ಜಿಲ್ಲಾ.

ಶ್ರೀ ಸತ್ಯನಾರಾಯಣ ಪ್ರೆಸ್, ಬೆಂಗಳೂರು-೨.

